# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1318

ಸದಸ್ಯರ ಹೆಸರು : ಶ್ರೀ ಎಸ್.ವಿ. ಸಂಕನೂರು (ಪದವೀಧರರ ಕ್ಷೇತ್ರ)

ಉತ್ತರಿಸ ಬೇಕಾದ ದಿನಾಂಕ : 21.12.2018

ಉತ್ತರಿಸಬೇಕಾದ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ಸುವರ್ಣ ರಾಜ್ಯೋತ್ಸವದಡಿ ಬಿಡಿಎ ಎಂಪ್ಲಾಯೀಸ್ ವೆಲ್ಫೇರ್ ಅಸೋಸಿಯೇಷನ್ ನವರು ನಿವೇಶನ ಹಂಚಿಕೆಯಲ್ಲಿ ನಡೆಸಿರುವ ಅವ್ಯವಹಾರಗಳು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಅಸೋಸಿಯೇಷನ್‌ಗೆ ಪ್ರಾಧಿಕಾರದಿಂದ ಯಾವ ಯಾವ ಗ್ರಾಮಗಳಲ್ಲಿ ಎಷ್ಟು ವಿಸ್ತೀರ್ಣದ ಜಮೀನನ್ನು ನೋಂದಣಿ ಮಾಡಿಕೊಡಲಾಗಿದೆ; ಪ್ರಾಧಿಕಾರವು ನೋಂದಣಿ ಮಾಡಿಕೊಡದೇ ಎಷ್ಟು ವಿಸ್ತೀರ್ಣದ ಜಮೀನನ್ನು ಅಕ್ರಮವಾಗಿ ನಕ್ಷೆಯಲ್ಲಿ ಸೇರಿಸಿ ಕಾನೂನುಬಾಹಿರವಾಗಿ ಉಪಯೋಗಿಸಿಕೊಳ್ಳಲಾಗಿದೆ; (ಸರ್ವೆ ನಂ.ವಿಸ್ತೀರ್ಣವಾರು ವಿವರ ನೀಡುವುದು) | **ದೊಡ್ಡಕಲ್ಲಸಂದ್ರ ಗ್ರಾಮ:-**<br>ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ದೊಡ್ಡಕಲ್ಲಸಂದ್ರ ಗ್ರಾಮದ ಸರ್ವೆ ನಂ. 15, 16 ಮತ್ತು 17 ರಲ್ಲಿನ 33ಎಕರೆ 02ಗುಂಟೆ ಜಮೀನನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಭೂ ಸ್ವಾಧೀನಪಡಿಸಿಕೊಂಡು BDA Employees Welfare Association ರವರ ಪರವಾಗಿ ದಿನಾಂಕ:09/11/2006 ರಂದು ಶುದ್ಧ ಕ್ರಯ ಪತ್ರದ ಮೂಲಕ ಸಗಟು ಹಂಚಿಕೆ ಮಾಡಿರುತ್ತದೆ.<br><br>ಸಂಘದ ಪರವಾಗಿ ಸಗಟು ಹಂಚಿಕೆಯಾಗಿ, ಅನುಮೋದಿತ ವಸತಿ ಬಡಾವಣೆ ನಕ್ಷೆಯಲ್ಲಿ ಸಿ.ಎ. ಮತ್ತು ಉದ್ಯಾನವನ/ಬಯಲು ಜಾಗಕ್ಕಾಗಿ ಕಾಯ್ದಿರಿಸಿದ ದೊಡ್ಡಕಲ್ಲಸಂದ್ರ ಗ್ರಾಮದ ಸರ್ವೆ ಸಂಖ್ಯೆ:17 ರಲ್ಲಿನ 02ಎಕರೆ ಪ್ರದೇಶವನ್ನು ಮುಸಲ್ಮಾನರ ರುದ್ರಭೂಮಿಗಾಗಿ ಜಿಲ್ಲಾಧಿಕಾರಿಗಳು ಬೆಂಗಳೂರು ನಗರ ಜಿಲ್ಲೆ ಇವರು ಹಂಚಿಕೆ ಮಾಡಿದ್ದರಿಂದ ಪ್ರಾಧಿಕಾರದ ಸಮಿತಿ ಸಭೆಯ ಠರಾವು ಸಂಖ್ಯೆ:29/2011, ದಿನಾಂಕ:28/02/2011 ರಲ್ಲಿ ದೊಡ್ಡಕಲ್ಲಸಂದ್ರ ಗ್ರಾಮದ ಸರ್ವೆ ನಂ.19 ರಲ್ಲಿನ 01ಎಕರೆ 28ಗುಂಟೆ ಪ್ರದೇಶವನ್ನು ಉದ್ಯಾನವನಕ್ಕಾಗಿಯೇ ಕಾಯ್ದಿರಿಸಿ, ವಾಸ್ತವವಾಗಿ ಲಭ್ಯವಿರುವ ಒಟ್ಟು ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ದೊಡ್ಡಕಲ್ಲಸಂದ್ರ ಗ್ರಾಮದ ಸರ್ವೆ ನಂ.15(ಪಿ), 16(ಪಿ), 17(ಪಿ), 19(ಪಿ) ರಲ್ಲಿನ ಒಟ್ಟು 27ಎಕರೆ 15.08ಗುಂಟೆ ವಿಸ್ತೀರ್ಣದ ಪ್ರದೇಶಕ್ಕೆ ಮಾರ್ಪಡಿತ ಬಡಾವಣೆ ನಕ್ಷೆಯನ್ನು ಅಸೋಸಿಯೇಷನ್ ರವರ ಪರವಾಗಿ ಅನುಮೋದಿಸಲು ತೀರ್ಮಾನಿಸಲಾಗಿರುತ್ತದೆ. ಅದರಂತೆ ದಿನಾಂಕ:04/07/2011 ರಂದು ಮಾರ್ಪಡಿತ ಕಾರ್ಯಾದೇಶವನ್ನು ನೀಡಲಾಗಿರುತ್ತದೆ. |

| | | |
|---|---|---|
| | | ಪ್ರಾಧಿಕಾರದ ಸಮಿತಿ ಸಭೆಯಲ್ಲಿ ಅನುಮೋದಿಸಲು ತೀರ್ಮಾನಿಸಿರುವ ಒಟ್ಟು 27ಎಕರೆ 15.08ಗುಂಟೆ ವಿಸ್ತೀರ್ಣದ ಪ್ರದೇಶಕ್ಕೆ ತಿದ್ದುಪಡಿ ಕ್ರಯ ಪತ್ರವನ್ನು ದಿನಾಂಕ:12/06/2013 ರಂದು ನೋಂದಾಯಿಸಿಕೊಡಲಾಗಿರುತ್ತದೆ. ಆದರೆ ಸರ್ವೆ ನಂ.19 ರಲ್ಲಿನ ಜಮೀನನ್ನು ಸಂಘಕ್ಕೆ (01ಎಕರೆ-28ಗುಂಟೆ) ಹಂಚಿಕೆ ಮಾಡಿರುವ ಬಗ್ಗೆ ತಿದ್ದುಪಡಿ ಕ್ರಯ ಪತ್ರದಲ್ಲಿ ನಮೂದಿಸದ ಕಾರಣ, ಈ ಜಮೀನನ್ನು ಸೇರಿದಂತೆ ತಿದ್ದುಪಡಿ ಕ್ರಯ ಪತ್ರ ನೋಂದಾಯಿಸಲು ಕ್ರಮಕೈಗೊಳ್ಳಲಾಗುತ್ತಿದೆ.<br><br>**<u>ಲಿಂಗಧೀರನಹಳ್ಳಿ ಗ್ರಾಮ:-</u>**<br><br>ಲಿಂಗಧೀರನಹಳ್ಳಿ ಗ್ರಾಮದ ಸರ್ವೆ ನಂ.6(ಭಾಗ) ರಲ್ಲಿನ 07 ಎಕರೆ ಜಮೀನನ್ನು ದಿನಾಂಕ:12-06-2007ರಲ್ಲಿ ಹಾಗೂ ಸರ್ವೆ ನಂ.6(ಭಾಗ)ರಲ್ಲಿನ 01ಎಕರೆ 38ಗುಂಟೆ ಮತ್ತು ಸರ್ವೆ ನಂ. 7(ಭಾಗ) ರಲ್ಲಿನ 03 ಎಕರೆ 02ಗುಂಟೆ ಒಟ್ಟು 05ಎಕರೆ ಜಮೀನನ್ನು 14/11/2007 ರಲ್ಲಿ BDA Employees Welfare Association ರವರಿಗೆ ಕ್ರಯ ಪತ್ರವನ್ನು ನೋಂದಾಯಿಸಿಕೊಡಲಾಗಿರುತ್ತದೆ. ಅದರಂತೆ ದಿನಾಂಕ:21/11/2007 ರ ಪ್ರಾಧಿಕಾರದ ಸಮಿತಿ ಸಭೆಯ ತೀರ್ಮಾನದಂತೆ 12ಎಕರೆ ಜಮೀನಿಗೆ ವಲಯ ನಿಯಮಾವಳಿ ಪ್ರಕಾರ ವಿನ್ಯಾಸ ನಕ್ಷೆ ಅನುಮೋದನೆ ನೀಡಿ, ದಿನಾಂಕ:27/08/2008 ರಂದು ಕಾರ್ಯಾದೇಶ ನೀಡಲಾಗಿದೆ.<br><br>ದಿನಾಂಕ:28/06/2011 ರಲ್ಲಿ ಸರ್ವೆ ನಂ.6(ಭಾಗ) ಮತ್ತು 7(ಭಾಗ) ಗಳಲ್ಲಿನ 03 ಎಕರೆ ಜಮೀನನ್ನು ಸದರಿ ಸಂಘಕ್ಕೆ ಸಗಟು ಹಂಚಿಕೆ ಮಾಡಿದ ಕಾರಣದಿಂದ ಒಟ್ಟು 15ಎಕರೆಗೆ ಮಾರ್ಪಡಿತ ನಕ್ಷೆಗೆ ಅನುಮೋದನೆ ನೀಡುವಂತೆ ಸಂಘದವರು ಕೋರಿರುತ್ತಾರೆ.<br><br>ಮಾರ್ಪಡಿತ ನಕ್ಷೆ ಅನುಮೋದನೆ ಸಂಬಂಧ ಭೂಸ್ವಾಧೀನ ವಿಭಾಗಕ್ಕೆ ಸರ್ವೆ ಸ್ಕೆಚ್ ದೃಢೀಕರಣ ಕೋರಿದ ಸಮಯದಲ್ಲಿ ಭೂಮಾಪಕರು ಹಂಚಿಕೆ ಆಗಿರುವ 15ಎಕರೆ ಜಮೀನು ಲಿಂಗಧೀರನಹಳ್ಳಿ ಗ್ರಾಮದ ಸರ್ವೆ ನಂ.1/4(ಭಾಗ), 6(ಭಾಗ), 7/1(ಭಾಗ), 7/5(ಭಾಗ), 7/6, 7/8, ಮತ್ತು 7/9(ಭಾಗ) ಎಂದು ದೃಢೀಕರಿಸಿರುವುದರಿಂದ ಪ್ರಾಧಿಕಾರದ ಸಮಿತಿ ಸಭೆಯ ತೀರ್ಮಾನದಂತೆ ಸದರಿ ಸರ್ವೆ ನಂಬರ್‌ಗಳನ್ನು ವಿನ್ಯಾಸದಲ್ಲಿ ಅಳವಡಿಸಿ, ದಿನಾಂಕ:18/02/2013 ರಂದು ಮಾರ್ಪಡಿತ ಕಾರ್ಯಾದೇಶವನ್ನು ನೀಡಲಾಗಿರುತ್ತದೆ.<br><br>ಅದರಂತೆ ಸರ್ವೆ ನಂ.1/4((ಭಾಗ), 6(ಭಾಗ), 7/1(ಭಾಗ), 7/5(ಭಾಗ), 7/6(ಭಾಗ), 7/8(ಭಾಗ), 7/9(ಭಾಗ) ಗಳ ವಿಸ್ತೀರ್ಣಗಳೊಂದಿಗೆ ಒಟ್ಟು 15ಎಕರೆ ವಿಸ್ತೀರ್ಣಕ್ಕೆ BDA Employees Welfare Association ಪರವಾಗಿ ತಿದ್ದುಪಡಿ ಕ್ರಯಪತ್ರ ನೋಂದಾಯಿಸಲು ಕ್ರಮತೆಗೆದುಕೊಳ್ಳಲಾಗುತ್ತಿದೆ. |
| ಇ) | ದೊಡ್ಡಕಲ್ಲಸಂದ್ರ ಗ್ರಾಮದಲ್ಲಿ 33 ಎಕರೆ 02 ಗುಂಟೆ ಜಮೀನನ್ನು ಬಿಡುಗಡೆ ಮಾಡಿ, ಜಮೀನಿನ ಲಭ್ಯತೆ 27 ಎಕರೆ 15 1/2 ಗುಂಟೆ ಪ್ರಾಧಿಕಾರದಿಂದ ತಿದ್ದುಪಡಿ ಕ್ರಯಪತ್ರವನ್ನು | ದೊಡ್ಡಕಲ್ಲಸಂದ್ರ ಗ್ರಾಮದ 33 ಎಕರೆ 02 ಗುಂಟೆ ಜಮೀನಿಗೆ ಮೂಲವಾಗಿ ಕ್ರಯಪತ್ರ ನೋಂದಾಯಿಸಿದ್ದು, ನಂತರ 27ಎಕರೆ 15½ ಗುಂಟೆ ಜಮೀನಿಗೆ ತಿದ್ದುಪಡಿ ಪತ್ರವನ್ನು ದಿನಾಂಕ:28.06.2011 ರಂದು ನೋಂದಾಯಿಸಲಾಗಿರುತ್ತದೆ. |

| | | |
|---|---|---|
| | ನೋಂದಣಿ ಮಾಡುವ ಮುನ್ನ ಪ್ರಾಧಿಕಾರದಿಂದ ಅಥವಾ ಕಂದಾಯ ಇಲಾಖೆಯೊಡನೆ ಜಂಟಿ ಸರ್ವೆ ಮಾಡಲಾಗಿದೆಯ; ಇದ್ದಲ್ಲಿ ಸರ್ವೆ ವರದಿ ನೀಡುವುದು ಇಲ್ಲದಿದ್ದಲ್ಲಿ ಸರ್ವೆ ಕಾರ್ಯ ಮಾಡದೇ ಯಾವ ಆಧಾರದಲ್ಲಿ ಕಡಿಮೆ ಜಮೀನಿನ ಲಭ್ಯತೆ ಇದೆ ಎಂದು ತೀರ್ಮಾನ ಕೈಗೊಳ್ಳಲಾಗಿದೆ; (ವರದಿ ನೀಡುವುದು) | ಮಾರ್ಪಡಿತ ವಸತಿ ಬಡಾವಣೆ ನಕ್ಷೆ ಅನುಮೋದನೆ ವೇಳೆ ಹಾಲಿ ಸ್ಥಳದಲ್ಲಿ ಲಭ್ಯವಿರುವ ಜಮೀನಿನ Total station survey ಮಾಡಿ ಲಭ್ಯವಿರುವ ವಿಸ್ತೀರ್ಣ 27ಎಕರೆ 15½ ಗುಂಟೆ ಎಂದು ಅಸೋಸಿಯೇಷನ್ ಅಧ್ಯಕ್ಷರು ನೀಡಿದ ನಕ್ಷೆಯನ್ನು ಪರಿಗಣಿಸಿ ಸದರಿ ವಿಸ್ತೀರ್ಣಕ್ಕೆ ಮಾರ್ಪಡಿತ ವಸತಿ ಬಡಾವಣೆ ನಕ್ಷೆಗೆ ಅನುಮೋದನೆ ನೀಡಿ, ನಂತರ ಸದರಿ ವಿಸ್ತೀರ್ಣಕ್ಕೆ ತಿದ್ದುಪಡಿ ಕ್ರಯಪತ್ರವನ್ನು ನೋಂದಣಿ ಮಾಡಲಾಗಿದ್ದು, ತಿದ್ದುಪಡಿ ಕ್ರಯಪತ್ರ ನೀಡುವ ಸಂದರ್ಭದಲ್ಲಿ ಪ್ರತ್ಯೇಕವಾಗಿ ಜಂಟಿ ಸರ್ವೆ ಮಾಡಿರುವುದಿಲ್ಲ. |
| ಈ) | ಲಿಂಗಧೀರನಹಳ್ಳಿ ಗ್ರಾಮದಲ್ಲಿ ಸುಮಾರು ಒಂದು ಎಕರೆ ಸಿ.ಎ ನಿವೇಶನವನ್ನು ಪ್ರಾಧಿಕಾರಕ್ಕೆ ಪರಿತ್ಯಜನಾ (Relinquishment Deed) ಮೂಲಕ ಅಧ್ಯರ್ಪಿಸಿದ ನಂತರವೂ ಅಕ್ರಮವಾಗಿ ಸಾರ್ವಜನಿಕ ವ್ಯಕ್ತಿಗೆ ಅಸೋಸಿಯೇಷನ್‌ನವರು ಮಾರಾಟ ಮಾಡಿದ್ದು, ಈ ಅಕ್ರಮ ನೋಂದಾಯಿತ ಕ್ರಯಪತ್ರ ರದ್ದುಪಡಿಸಲು ಪ್ರಾಧಿಕಾರ ಕೈಗೊಂಡಿರುವ ಕ್ರಮಗಳೇನು; | ಸದರಿ ಸಿ.ಎ.ನಿವೇಶನವನ್ನು ಪ್ರಾಧಿಕಾರದ ವಶಕ್ಕೆ ಪಡೆಯಲಾಗಿರುತ್ತದೆ. ಅಕ್ರಮ ನೋಂದಾಯಿತ ಕ್ರಯಪತ್ರ ರದ್ದುಪಡಿಸಲು ಕ್ರಮವಹಿಸಲಾಗುತ್ತಿದೆ. |
| ಉ) | ಅಸೋಸಿಯೇಷನ್ ಅಧ್ಯಕ್ಷರು ಮತ್ತು ಪ್ರಧಾನ ಕಾರ್ಯದರ್ಶಿಗಳ ವಿರುದ್ಧ ಕ್ರಿಮಿನಲ್ ಮೊಕದ್ದಮೆ ದಾಖಲು ಮಾಡಬೇಕೆಂದು ಹಿಂದಿನ ಆಯುಕ್ತರು ಆದೇಶ ಮಾಡಿದ್ದಾರೆಯೇ; ಯಾವ ದಿನಾಂಕದಂದು ಆದೇಶಿಸಲಾಗಿದೆ; ಇಲ್ಲಿಯವರೆಗೂ ಮೊಕದ್ದಮೆ ಏಕೆ ದಾಖಲಾಗಿಲ್ಲದಿರಲು ಕಾರಣಗಳೇನು? | ಅಸೋಸಿಯೇಷನ್ ಅಧ್ಯಕ್ಷರು ಮತ್ತು ಪ್ರಧಾನ ಕಾರ್ಯದರ್ಶಿಗಳ ವಿರುದ್ಧ ಕ್ರಿಮಿನಲ್ ಮೊಕದ್ದಮೆ ದಾಖಲು ಮಾಡಬೇಕೆಂದು ಹಿಂದಿನ ಆಯುಕ್ತರು ಆದೇಶಿಸಿರುವುದಿಲ್ಲ. ಆದರೆ, ಪ್ರಸ್ತುತ ಆಯುಕ್ತರು ಸದರಿಯವರುಗಳ ಮೇಲೆ ಕ್ರಿಮಿನಲ್ ಮೊಕದ್ದಮೆ ಹೂಡಲು ದಿನಾಂಕ:06.12.2018 ರಂದು ಆದೇಶಿಸಿರುತ್ತಾರೆ. ಅದರಂತೆ, ಕ್ರಮವಹಿಸಲಾಗುತ್ತಿದೆ. |

ಸಂಖ್ಯೆ: ನಅಇ 668 ಬೆಂಭೂಸ್ವಾ 2018

(ಡಾ|| ಜಿ. ಪರಮೇಶ್ವರ)
ಉಪ ಮುಖ್ಯಮಂತ್ರಿ